



# ಹೊಂಗನಸು



ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ವಾರ್ತಾಪತ್ರ

ಹೊಂಗನಸು – 27

| ಸಂಪುಟ: ೦೪ ಸಂಚಿಕೆ: ೧ | ಏಪ್ರಿಲ್ ೨೦೧೭ | ಪುಟಗಳು ೮ | ವಾರ್ಷಿಕ ಚಂದ ರೂ. ೨೦/– | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ |
|---|---|---|---|---|
| Vol. 04 Issue 1 | April 2017 | Pages - 8 | A. Sub. - Rs. 20/- | Editor : Sri. B.R. Ravindranath |




**ಚಂದಾ ವಿವರಗಳು**

ವಾರ್ಷಿಕ ಚಂದಾ
ರೂ. ೨೦/–

ಐದು ವರ್ಷಗಳ ಚಂದಾ
ರೂ. ೧೦೦/–

ವಿಳಾಸ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಸ್ಥಾಪನೆ : ೦೬–೦೫–೧೯೭೮
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ:
೨೬೬೧೫೮೭೭, ೨೬೬೭೬೭೭೩
ಇಮೇಲ್ : bmsritrust@gmail.com
web: www.bmshri.org



ಹೊಂಗನಸು ಓದುಗರಿಗೆ, ಪ್ರತಿಷ್ಠಾನದ ಸದಸ್ಯರಿಗೆ ಯುಗಾದಿ ಹಬ್ಬದ
ಹಾರ್ದಿಕ ಶುಭಾಶಯಗಳು
ಹಾಗೂ ಎಲ್ಲರಿಗೂ ಹೇವಿಳಂಬಿ ಸಂವತ್ಸರದಲ್ಲಿ ಆಯುರ್,
ಆರೋಗ್ಯ ಐಶ್ವರ್ಯ ಬಿರುದು ಸನ್ಮಾನಗಳು ಲಭಿಸಲಿ ಎಂದು ಹೊಂಗನಸು ಹಾರೈಸುತ್ತದೆ.

## ಬುದ್ಧ–ಕನಕ : ತಾತ್ವಿಕ ಅನುಸಂಧಾನ

ರಾಷ್ಟ್ರೀಯ ಸಂತಕವಿ ಕನಕದಾಸ ಅಧ್ಯಯನ ಮತ್ತು ಸಂಶೋಧನ ಕೇಂದ್ರ ಹಾಗೂ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಸಹಯೋಗದಲ್ಲಿ ಮಾರ್ಚ 10, 2017 ಶುಕ್ರವಾರದಂದು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಎಂ.ವಿ.ಸೀ ಸಭಾಂಗಣದಲ್ಲಿ ಒಂದು ದಿನದ ವಿಚಾರ ಸಂಕಿರಣವನ್ನು ಆಯೋಜಿಸಲಾಗಿತ್ತು.

ಈ ವಿಚಾರ ಸಂಕಿರಣದಲ್ಲಿ ಆ ಕೆಳಕಂಡ ವಿಷಯಗಳ ಮಂಡನೆ ಮತ್ತು ಚರ್ಚೆಗಳು ನಡೆದವು.

1. ಬೌದ್ಧಧರ್ಮ ಮತ್ತು ಭಕ್ತಿಪಂಥದ ತಾತ್ವಿಕ ನೆಲೆಗಳು – ಡಾ. ಕೇಶವ ಮಳಗಿ
2. ಯೋಗ ಮತ್ತು ತಂತ್ರಪ್ರಸ್ಥಾನಗಳು ಮತ್ತು ಕನಕದಾಸರ ಅಭಿವ್ಯಕ್ತಿ – ಡಾ. ಜಿ.ಬಿ.ಹರೀಶ
3. ಬೌದ್ಧ ಚಿಂತನೆ ಹಿನ್ನೆಲೆಯಲ್ಲಿ 'ನೀ ಮಾಯೆಯೊಳಗೋ ನಿನ್ನೊಳು ಮಾಯೆಯೋ' – ಶ್ರೀಮತಿ ಶ್ರೀ ದೇವು ಪತ್ತಾರ
4. ಮಧ್ಯಯುಗೀನ ಭಕ್ತಿಪಂಥ–ಭಿನ್ನ ಓದುಗಳು – ಡಾ. ಗೀತಾ ವಸಂತ, ತುಮಕೂರು

ನಮ್ಮ ಊಹೆಗೂ ಮೀರಿ ಸುಮಾರು 160 ವಿದ್ಯಾರ್ಥಿಗಳು ಮತ್ತು ವಿವಿಧ ಕಾಲೇಜಿನ ಅಧ್ಯಾಪಕರು ಪೂರ್ವ ಸಿದ್ಧತೆಯೊಂದಿಗೆ ಭಾಗವಹಿಸಿ ವಿಚಾರ ಸಂಕಿರಣವನ್ನು ಚರ್ಚೆ ಮತ್ತು ಸಂವಾದಕ್ಕೆ ಅನುವು ಮಾಡಿಕೊಟ್ಟು, ವಿಚಾರ ಸಂಕಿರಣದ ಉಪಯುಕ್ತತೆಯನ್ನು ಎಲ್ಲ ವಿದ್ಯಾರ್ಥಿಗಳು ಮನಗಂಡರು. ವಿದ್ಯಾರ್ಥಿಗಳು ನಿರ್ಭಯವಾಗಿ ಪ್ರಶ್ನೆಗಳನ್ನು ಕೇಳಿ, ಸಂವಾದದಲ್ಲಿ ತೊಡಗಿಕೊಂಡ ಬಗೆ ಮತ್ತು ಸಮಸ್ಯೆಗಳಿಗೆ ದೊರಕಿದ ಉತ್ತರವನ್ನು ಸ್ವೀಕರಿಸಿದ ರೀತಿ ಗಮನಾರ್ಹವಾಗಿತ್ತು.

ಕಾರ್ಯಕ್ರಮದ ಪ್ರಸ್ತಾವನೆ ಮತ್ತು ವಿಚಾರ ಸಂಕಿರಣದ ಆಶಯಗಳನ್ನು ಡಾ|| ಪಿ.ವಿ. ನಾರಾಯಣ ಅವರು ಪರಿಚಯಿಸಿದರು.

ಶ್ರೀ ಕಾ.ತ.ಚಿಕ್ಕಣ್ಣ, ಸಮನ್ವಯಾಧಿಕಾರಿಗಳು, ರಾಷ್ಟ್ರೀಯ ಸಂತ ಕವಿ ಕನಕದಾಸ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ, ಬೆಂಗಳೂರು, ಇವರು ಅಧ್ಯಕ್ಷತೆ ವಹಿಸಿದ್ದರು.

ಪ್ರೊ. ಜಿ. ಅಬ್ದುಲ್ ಬಷೀರ್ ಅವರ ವಂದನಾರ್ಪಣೆಯೊಂದಿಗೆ ವಿಚಾರ ಸಂಕಿರಣ ಮುಕ್ತಾಯಗೊಂಡಿತು.



## ಸಂಪಾದಕೀಯ

ಕೇಂದ್ರ ಸರ್ಕಾರದ ಹಾಗೂ ರಾಜ್ಯ ಸರ್ಕಾರದ ಬಜೆಟ್ ಗಳ ಘೋಷಣೆಯಾಗಿವೆ. ಜನಪರ ಕಾಳಜಿಯಿಂದ ರೂಪಿಸಲಾಗಿದೆ ಎಂದು ಹೇಳಿದರೂ ಇದು ವೋಟುಪರ ಕಾಳಜಿಯಿಂದ ರೂಪಿಸಿರುವ ಬಜೆಟ್‌ಗಳಾಗಿರುತ್ತವೆ.

ಆದರೂ ವೋಟುಗಳ ಬಗ್ಗೆ ಕಾಳಜಿ ವಹಿಸುವ ಭರದಲ್ಲಿ ಕೆಲವು ಉತ್ತಮ ಕ್ರಮಗಳು ಮೂಡಿ ಬಂದಿರುತ್ತವೆ. ಉದಾಹರಣೆಗೆ ಕರ್ನಾಟಕದ ಬಜೆಟ್ ನಲ್ಲಿ ಮಾನ್ಯ ಮುಖ್ಯಮಂತ್ರಿ ಅವರು ಕನ್ನಡ ಸಿನಿಮಾಗಳ ಕಡ್ಡಾಯ ಪ್ರದರ್ಶನ ಹಾಗೂ ಚಿತ್ರಮಂದಿರಗಳ ಪ್ರವೇಶ ಶುಲ್ಕವನ್ನು ಗರಿಷ್ಟ ರೂ. 200/– ಗಳಿಗೆ ಮಿತಿಗೊಳಿಸಿರುತ್ತಾರೆ. ಕನ್ನಡ ಚಿತ್ರೋದ್ಯಮಕ್ಕೆ ಇದು ಸಹಾಯಕವಾಗುವುದರಲ್ಲಿ ಸಂದೇಹವಿಲ್ಲ.

ಆದರೆ, ಅದೇ ಬಜೆಟ್ ನಲ್ಲಿ ಬಹುಶಃ ಇಂಗ್ಲೀಷ್ ಪರ ಜನರ ವೋಟುಗಳನ್ನು ಗಳಿಸುವ ಉದ್ದೇಶದಿಂದ ಮೊದಲನೇ ತರಗತಿಯಿಂದಲೇ ಮಕ್ಕಳಿಗೆ ಇಂಗ್ಲೀಷ್ ಬೋಧನೆಯನ್ನು ಪ್ರಾರಂಭಿಸುವ ಪ್ರಸ್ತಾವನೆಯನ್ನು ಮಂಡಿಸಿರುತ್ತಾರೆ.ಈ ಕ್ರಮದಿಂದ ಕನ್ನಡ ಭಾಷೆಯ ಬೆಳವಣಿಗೆಯ ಮೇಲೆ ದುಷ್ಪರಿಣಾಮ ಉಂಟಾಗುವುದು ನಿಶ್ಚಿತ. ಈ ಬಗ್ಗೆ ನಾವುಗಳು ಯಾವ ನಿಲುವನ್ನು ತಳೆಯಬೇಕು?

ಹೊಂಗನಸು ಪತ್ರಿಕೆಯನ್ನು ಹೆಚ್ಚು ವರ್ಣ ರಂಜಿತ ಹಾಗೂ ಹೆಚ್ಚು ಉಪಯುಕ್ತವಾಗಿ ಮಾಡಲು ಶ್ರಮಿಸುತ್ತಿದ್ದೇವೆ. ನಿಮ್ಮ ಸಲಹೆಗಳು ಹಾಗೂ ಪ್ರತಿಕ್ರಿಯೆಗಳಿಗೆ ಸ್ವಾಗತ.

ಬಿ.ಆರ್ ರವೀಂದ್ರನಾಥ್
ಸಂಪಾದಕರು.......

### ಏಪ್ರಿಲ್ ತಿಂಗಳಿನಲ್ಲಿ ಜನಿಸಿದ ಸಾಹಿತ್ಯೋಪಾಸಕರು

| | |
|---|---|
| ಶಾಂತರಸ | 04–04–1929 |
| ಫರ್ಡಿನಾಂಡ್ ಕಿಟೆಲ್ | 08–04–1832 |
| ಆರ್. ನರಸಿಂಹಚಾರ್ | 09–04–1861 |
| ಆನಂದಕಂದ ಬೇಟಗೇರಿ ಕೃಷ್ಣಶರ್ಮಾ | 16–04–1900 |
| ತರಾಸು | 21–04–1920 |
| ಬೀಚಿ | 23–04–1913 |
| ಪಿಕ್ರಿನ್ | 26–04–1849 |
| ತಿರುಮಲೆ ತಾತಾಚಾರ್ಯ ಶರ್ಮಾ | 27–04–1895 |

### ಏಪ್ರಿಲ್ ತಿಂಗಳಿನಲ್ಲಿ ನಿಧನರಾದ ಸಾಹಿತ್ಯೋಪಾಸಕರು

| | |
|---|---|
| ಭಾರತಿಸುತ | 04–04–1976 |
| ತರಾಸು | 10–04–1920 |
| ಎಂ.ಎಸ್. ಪುಟ್ಟಣ್ಣ | 11–04–1930 |
| ಗಳಗನಾಥರು | 22–04–1942 |
| ವಿಕೃ ಗೋಕಾಕ್ | 28–04–1992 |



## ಗೌರವ ಕಾರ್ಯದರ್ಶಿ ಸ್ಥಾನಕ್ಕೆ ಶ್ರೀ ಬಿ. ಆರ್.ರವೀಂದ್ರನಾಥ್ ಅವರ ಪುನರಾಯ್ಕೆ

ದಿನಾಂಕ 25–02–2017 ರಂದು ನಡೆದ ಕಾರ್ಯಕಾರಿ ಸಮಿತಿಯ ಸಭೆಯಲ್ಲಿ ದಿನಾಂಕ 25–01–2017 ರಂದು ಗೌರವ ಕಾರ್ಯದರ್ಶಿ ಶ್ರೀ ಬಿ.ಆರ್.ರವೀಂದ್ರನಾಥ್ ಅವರ ಮೂರು ವರ್ಷದ ಅವಧಿ ಮುಗಿದಿರುವ ವಿಷಯದ ಬಗ್ಗೆ ಚರ್ಚೆ ನಡೆದು ಶ್ರೀ ಬಿ. ಆರ್.ರವೀಂದ್ರನಾಥ್ ಅವರೇ ಮುಂದಿನ ಮೂರು ವರ್ಷದ ಅವಧಿಗೂ ಮುಂದುವರೆಯಬೇಕೆಂದು ಸಭೆಯು ಸರ್ವಾನುಮತದಿಂದ ಅವರನ್ನು ಕೋರಿತು. ಇದಕ್ಕೆ ಶ್ರೀ ಬಿ. ಆರ್. ರವೀಂದ್ರನಾಥ್ ಅವರು ಸಮ್ಮತಿ ಸೂಚಿಸಿದರು. ಶ್ರೀ ಬಿ.ಆರ್. ರವೀಂದ್ರನಾಥ್ ಅವರು 25–02–2020ರ ವರೆಗೆ ಬಿ.ಎಂ. ಶ್ರೀ ಪ್ರತಿಷ್ಠಾನದ ಗೌರವ ಕಾರ್ಯದರ್ಶಿಯಾಗಿ ಮುಂದುವರೆಯುತ್ತಾರೆ.

ಹೊಂಗನಸು ಅವರಿಗೆ ಅಭಿನಂದನೆಗಳನ್ನು ಸಲ್ಲಿಸುತ್ತದೆ.

### ಪ್ರಕಟಣೆ

ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನದಲ್ಲಿ ಈ ವರ್ಷ ಸ್ಥಾಪಿತವಾಗಿರುವ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಹಿಂದಿನ ಅಧ್ಯಕ್ಷರು ಹಾಗೂ ಪ್ರಸಿದ್ಧ ಸಾಹಿತಿ ಪ್ರೊ.ಎಲ್.ಎಸ್.ಶೇಷಗಿರಿರಾವ್ ದತ್ತಿ ವತಿಯಿಂದ ಪ್ರತಿಷ್ಠಾನವು ಕೊಡಮಾಡುವ 'ವಿಮರ್ಶಕ ಪ್ರಶಸ್ತಿಯನ್ನು ವಿಮರ್ಶಾ ಕ್ಷೇತ್ರದಲ್ಲಿ ಗಣನೀಯ ಕೊಡುಗೆ ನೀಡಿರುವ ವಿಮರ್ಶಕರೊಬ್ಬರಿಗೆ ನೀಡಲು ತೀರ್ಮಾನಿಸಿದ್ದು ಆ ಕ್ಷೇತ್ರದಲ್ಲಿನ ಅವರ ಕೊಡುಗೆ ವಿಶಿಷ್ಟವೆಂದು ಆಯ್ಕೆ ಸಮಿತಿಯು ಪರಿಗಣಿಸಿ ಈ ವರ್ಷದ ಪ್ರಶಸ್ತಿಗೆ ಡಾ.ಜಿ.ಆರ್.ತಿಪ್ಪೇಸ್ವಾಮಿಯವರನ್ನು ಆಯ್ಕೆ ಮಾಡಿದೆ. ಪ್ರಶಸ್ತಿಯು ರೂ. 10,000/–ನಗದನ್ನು ಒಳಗೊಂಡಿದೆ. ಪ್ರತಿಷ್ಠಾನದ ಸಭಾಂಗಣದಲ್ಲಿ 20ನೇ ಏಪ್ರಿಲ್ 2017ರಂದು ನಡೆಯಲಿರುವ ವಿಶೇಷ ಸಮಾರಂಭದಲ್ಲಿ ಪ್ರಶಸ್ತಿ ಪ್ರದಾನ ಮಾಡಲಾಗುವುದು. ಆಯ್ಕೆ ಸಮಿತಿಯ ಸದಸ್ಯರು :ಪ್ರೊ ಕಾ.ವೆಂ ಶ್ರೀನಿವಾಸ ಮೂರ್ತಿ, ಪ್ರೊ. ಶಾಂತರಾಜು ಹಾಗೂ ಪ್ರೊ, ಶೀಲಾ ಮಳಿಮಠ

### ಕೃತಜ್ಞತೆಗಳು

ಜನವರಿ–ಡಿಸೆಂಬರ್ 2017 ಅವಧಿಗೆ ಸಂಯುಕ್ತ ಕರ್ನಾಟಕ ದಿನಪತ್ರಿಕೆಯ ವಾರ್ಷಿಕ ಚಂದಾವನ್ನು ಶ್ರೀ ಡೀ.ನಂ. ವೆಂಕಟರಮಯ್ಯನವರು ಬಿ.ಎಂ.ಶ್ರೀ ಪ್ರತಿಷ್ಠಾನಕ್ಕೆ ನೀಡಿದ್ದಾರೆ. ಅವರಿಗೆ ಕೃತಜ್ಞತೆಗಳು.

## ಆಧುನಿಕ ವಚನಗಳು

–ಜಿ. ಅಬ್ದುಲ್ ಬಷೀರ್

ತಂದೆಗೊಂದು ಕಾರು
ತಾಯಿಗೊಂದು ಕಾರು
ಮಗನಿಗೊಂದು ಕಾರು
ಮಗಳಿಗೊಂದು ಕಾರು
ಸರ್ಕಾರಿ ಬಸ್ಸು ಯಾರಿಗೂ ಬೇಡವಾಯಿತಲ್ಲಯ್ಯಾ
ಈ ಕಾರು–ಬಾರುಗಳ ಗಲಾಟೆಯಿಂದ
ರಸ್ತೆಯೇ ಕಿರಿದಾಯಿತಲ್ಲಯ್ಯಾ 'ಅಲ್ಲಾರಖಾ'! ॥18॥

## ಹಳಗನ್ನಡ ತರಗತಿಗಳು

**ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನವು 4 ತಿಂಗಳ ಹಳಗನ್ನಡ ತರಗತಿಗಳನ್ನು ನಡೆಸಲು ಉದ್ದೇಶಿಸಿರುತ್ತದೆ. ಈ ತರಗತಿಗಳನ್ನು ಪ್ರತಿ ಶುಕ್ರವಾರ ಹಾಗೂ ಶನಿವಾರ ಸಂಜೆ ನಡೆಸಲಾಗುತ್ತದೆ. ಈ ತರಗತಿಗಳಿಗೆ ಬಹಳಷ್ಟು ಅಭ್ಯರ್ಥಿಗಳು ಉತ್ಸಾಹದಿಂದ ಮುಂದೆ ಬಂದಿದ್ದು ಈಗಾಗಲೇ ಸುಮಾರು 75 ಅಭ್ಯರ್ಥಿಗಳು ಪ್ರವೇಶ ಪಡೆದಿರುತ್ತಾರೆ. ಈ ತರಗತಿಗಳನ್ನು 24ನೇ ಮಾರ್ಚಿ 2017ರಂದು ಪ್ರಾರಂಭಿಸಲಾಗಿರುತ್ತದೆ.**

# ಏಪ್ರಿಲ್ 2017 ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

## ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ



**05–04–2017 ಬುಧವಾರ ಸಂಜೆ 6–00 ಗಂಟೆಗೆ**

ಗಮಕವಾಹಿನಿ–15

ಹೆಸರು: ಪಂಪಭಾರತ ಮುಂದುವರೆದ ಭಾಗ

ವಾಚನ : ಕು॥ ಭಾವನಾ ಉಮೇಶ್.

ವ್ಯಾಖ್ಯಾನ :ಡಾ॥ ಅನ್ನದಾನೇಶ್

ನೇತೃತ್ವ– ಶ್ರೀಮತಿ ಶ್ರೀಮತಿ



**7–04–2017 ಶುಕ್ರವಾರ ಸಂಜೆ 6–00 ಗಂಟೆಗೆ**

ಪದ್ಮಶ್ರೀ ನಾಡೋಜ ಪ್ರೊ. ಜಿ. ವೆಂಕಟಸುಬ್ಬಯ್ಯ ಅವರಿಗೆ ಸನ್ಮಾನ

ಹಾಗೂ

"ವಿಶೇಷ ಅಕ್ಕರಗೊಟ್ಟಿ"

ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ

ವಿಷಯ : ಕುಮಾರವ್ಯಾಸ ಭಾರತದ ಶಲ್ಯ ಪರ್ವ, 1ನೇ ಸಂಧಿ, 25ನೇ ಪದ್ಯ.

ಚಾಲನೆ: ಪದ್ಮಶ್ರೀ ನಾಡೋಜ ಪ್ರೊ. ಜಿ. ವೆಂಕಟಸುಬ್ಬಯ್ಯ.

(ಪುಟ 8ರಲ್ಲಿ ಪದ್ಯ ನೀಡಲಾಗಿದೆ)



**13–04–2017 ಗುರುವಾರ ಸಂಜೆ 6–00 ಗಂಟೆಗೆ**

ಸಿ.ಕೆ. ನಾಗರಾಜರಾವ್, ಕೆ.ಪಿ.ರಾವ್ ,ಕೊರಟಿ ಶ್ರೀನಿವಾಸರಾವ್ ದತ್ತಿ ಕಾರ್ಯಕ್ರಮ

ವಿಷಯ : ಬಸವರಾಜ ಕಟ್ಟೀಮನಿ

ಉಪನ್ಯಾಸಕರು: ಡಾ. ಬಸವರಾಜ ಸಾದರ, ಸುಪ್ರಸಿದ್ಧ ಸಾಹಿತಿಗಳು.



**17–4–2017 ಸೋಮವಾರ ಸಂಜೆ 6–00 ಗಂಟೆಗೆ**

ಕನ್ನಡ ಸಂಸ್ಕೃತಿ ದರ್ಶನ

ಕನ್ನಡ ಸಾಂಸ್ಕೃತಿಕ ಚಿತ್ರ ಪ್ರದರ್ಶನ



**20–04–2017 ಗುರುವಾರ ಸಂಜೆ 6–00 ಗಂಟೆಗೆ**

ಪ್ರೊ. ಎಲ್. ಎಸ್. ಶೇಷಗಿರಿರಾವ್ ವಿಮರ್ಶಕ ಪ್ರಶಸ್ತಿ

ಪ್ರಶಸ್ತಿ ಪ್ರದಾನ ಮತ್ತು ಅಧ್ಯಕ್ಷತೆ : ಪ್ರೊ. ಎಸ್.ಜಿ. ಸಿದ್ಧರಾಮಯ್ಯ

ಅಧ್ಯಕ್ಷರು ಕನ್ನಡ ಅಭಿವೃದ್ಧಿ ಪ್ರಾಧಿಕಾರ

ಪ್ರಶಸ್ತಿ ಪುರಸ್ಕೃತರು: ಡಾ.ಜಿ.ಆರ್. ತಿಪ್ಪೇಸ್ವಾಮಿ





**22–04–2017 ಶನಿವಾರ ಸಂಜೆ 6–00 ಗಂಟೆಗೆ**

ರಂಗಸಂವಾದ–9

ನಾಟಕ : ಸಂಸ್ಕೃತಿ ಮಾಲಿನ್ಯ

ರಚನೆ, ನಿರ್ದೇಶನ : ಶ್ರೀ ವಿಜಯ್ ಎ.



**26–04–2017 ಬುಧವಾರ ಸಂಜೆ 6–00 ಗಂಟೆಗೆ**

ಕ.ವೆಂ. ರಾಘವಾಚಾರ್ ಡಿ.ವಿ. ಗುಂಡಪ್ಪ, ಬಿ.ಎಸ್. ಸಣ್ಣಯ್ಯ ದತ್ತಿ ಕಾರ್ಯಕ್ರಮ

ಉಪನ್ಯಾಸಕರು : ಡಾ.ಬಿ.ಯು. ಸುಮ

ವಿಷಯ : 'ಕನ್ನಡದ ಅನುಭಾವ ಸಾಹಿತ್ಯದ ಹಿನ್ನೆಲೆಯಲ್ಲಿ ಸಾಂಸ್ಕೃತಿಕ ಸ್ತ್ರೀವಾದ'

# ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಫೆಬ್ರವರಿ 2017 – ಮಾರ್ಚ್ 2017 ತಿಂಗಳುಗಳಲ್ಲಿ ನಡೆದ ಕಾರ್ಯಕ್ರಮಗಳು

## "ರಂಗ ಸಂವಾದ–6"

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಮತ್ತು ಗ್ರೀನ್ ಸ್ಟೇಜ್ ಸಹಯೋಗದಲ್ಲಿ ನಾಟಕ

ನಾಟಕ : ಫಸ್ಟ್ ರ್‍ಯಾಂಕ್

ರಚನೆ : ಶ್ರೀ ವಿಜಯ್ ಎ.

ನಿರ್ದೇಶನ : ಶ್ರೀ ವಿಜಯ್ ಎ.



ಪ್ರತಿ ತಿಂಗಳೂ ಕೊನೆಯ ಶನಿವಾರ ಸಂಜೆ ನಡೆಯುವ ಬಿ.ಎಂ.ಶ್ರೀ. ಪ್ರತಿಷ್ಠಾನ ಮತ್ತು ಗ್ರೀನ್ ಸ್ಟೇಜ್ ಸಹಯೋಗದಲ್ಲಿ ನಡೆಸಲಾಗುವ 'ರಂಗ ಸಂವಾದ' ಕಾರ್ಯಕ್ರಮದಲ್ಲಿ ಸಾಮಾಜಿಕ ಚಿಂತನೆಗಳನ್ನು ಒಳಗೊಳ್ಳುವ ನಾಟಕಗಳ ಪ್ರದರ್ಶನ ಮಾಡಲಾಗುತ್ತದೆ.ಸಣ್ಣ ವಯಸ್ಸಿನ ಮಕ್ಕಳ ಮೇಲೆ ತರಗತಿಗಳಲ್ಲಿ ಹೆಚ್ಚಿನ ಅಂಕಗಳನ್ನು ಗಳಿಸುವ ಒತ್ತಡವನ್ನು ಹಾಕುವುದರಿಂದ ಉಂಟಾಗುವ ದುಷ್ಪರಿಣಾಮಗಳ ಬಗ್ಗೆ ಮನ ಮುಟ್ಟುವಂತೆ ಫಸ್ಟ್ ರ್‍ಯಾಂಕ್ ನಾಟಕವನ್ನು ಪ್ರದರ್ಶಿಸಲಾಯಿತು.ಡಾ. ಪಿ ವಿ ನಾರಾಯಣ ಅವರು ಸ್ವಾಗತವನ್ನು ಕೋರಿ ಕಾರ್ಯಕ್ರಮಕ್ಕೆ ಚಾಲನ ನೀಡಿದರು. ರವೀಂದ್ರನಾಥ ಅವರು ವಂದನಾರ್ಪಣೆ ಸಲ್ಲಿಸಿದರು.

## ಡಾ॥ ಆ.ನೇ ಉಪಾಧ್ಯೆ, ಡಾ॥ ಡಿ.ಎಲ್. ನರಸಿಂಹಚಾರ್ ಮತ್ತು ಶ್ರೀ ಎಂ.ಜಿ. ನಂಜುಂಡಾರಾಧ್ಯ ದತ್ತಿ ಕಾರ್‍ಯಕ್ರಮ



ದಿನಾಂಕ 28–2–2017ರಂದು, ಪ್ರೊ.ಆರ್.ಸಿ.ಕುಲಕರ್ಣಿ, ನಿವೃತ್ತ ಪ್ರಾಧ್ಯಾಪಕರು ಎಂ.ಇ.ಎಸ್. ಕಾಲೇಜು, ಮಲ್ಲೇಶ್ವರಂ, ಇವರಿಂದ "ಬೇಂದ್ರೆ ಕಾವ್ಯದಲ್ಲಿ ದಾಂಪತ್ಯ" ಎಂಬ ವಿಷಯವನ್ನು ಕುರಿತು ಉಪನ್ಯಾಸವನ್ನು ಏರ್ಪಡಿಸಲಾಗಿತ್ತು. ಬೇಂದ್ರೆ ಕಾವ್ಯಗಳನ್ನು ವಿಶೇಷವಾಗಿ ಅಧ್ಯಯನ ಮಾಡಿರುವ ಶ್ರೀ ಕುಲಕರ್ಣಿಯವರು, ಬೇಂದ್ರೆಯವರು ಕವಿ ಲಕ್ಷ್ಮೀಶನಿಂದ ಪ್ರಭಾವಿತರಾಗಿದ್ದರು ಮತ್ತು ಪ್ರೇರಿತರಾಗಿದ್ದರು ಎಂಬ ಅಂಶವನ್ನು ಸೋದಾಹರಣವಾಗಿ ತಿಳಿಸಿದರು. ಆಡುವ ಮಾತನ್ನೆಲ್ಲವನ್ನೂ ಕವಿತೆಯಾಗಿ ರೂಪಾಂತರ ಮಾಡುವ ನೈಪುಣ್ಯತೆಯನ್ನು ಅವರ ಕವಿತೆಗಳಲ್ಲಿ ಕಾಣಬಹುದು. ಇದು ಅವರದೊಂದು ವಿಶೇಷವಾದ ವಿಸ್ಮಯವನ್ನುಂಟು ಮಾಡುವ ಸಾಹಿತ್ಯಕ ಕಲೆ ಎನ್ನಬಹುದು ಎಂದು ಹೇಳಿ ಅವರ ಕೆಲವು ಕವಿತೆಗಳ ಆಯ್ದು ತುಣುಕುಗಳನ್ನು ವಾಚನಮಾಡಿದರು.ಬೇಂದ್ರೆಯವರು ತಮ್ಮ ಶ್ರೀಮತಿಯನ್ನು ದೈವದ ಪುತ್ಥಳಿಯೆಂದೇ ಸಂತೋಷವಾಗಿ ಹೆಮ್ಮೆಯಿಂದ ಹೇಳುತ್ತಿದ್ದರು ಎಂದು ತಮ್ಮ ನೆನಪಿನ ಬುತ್ತಿಯನ್ನು ಬಿಚ್ಚಿಟ್ಟರು. ಬೇಂದ್ರೆಯವರ ಕೆಲವು ಕವಿತೆಗಳಲ್ಲಿ ದಾಂಪತ್ಯದ ಬಗೆಗಿನ ನೋವು ನುಂಗಿ ನಗೆ ಚಿಮ್ಮಿಸಿದ ಸನ್ನಿವೇಶಗಳನ್ನು ಮತ್ತು ದಾಂಪತ್ಯದ ಸರಸ ವಿರಸಗಳನ್ನು ಶ್ರೀಕುಲಕರ್ಣಿಯವರು ಸವಿವರವಾಗಿ, ಉಪನ್ಯಾಸ ನೀಡಿದರು. ಬೇಂದ್ರೆಯವರ ಅಭಿಮಾನಿಗಳು ಮತ್ತು ಸಾಹಿತ್ಯಾಸಕ್ತ ವಿದ್ವಾಂಸರು ಸಾಕಷ್ಟು ಸಂಖ್ಯೆಯಲ್ಲಿ ಭಾಗವಹಿಸಿದ್ದರು.

ಪ್ರೊ. ಅಬ್ದುಲ್ ಬಷೀರ್ ಉಪನ್ಯಾಸಕರನ್ನು ಸಭೆಗೆ ಪರಿಚಯ ಮಾಡಿಕೊಟ್ಟು ವಂದನಾರ್ಪಣೆ ಸಲ್ಲಿಸಿದರು.

## ಗಮಕವಾಹಿನಿ–14

## 01–03–2017



ಹೆಸರು: ಪಂಪಭಾರತ

ವಾಚನ : ಕು॥ ದ್ಯುತಿ ಜಾಗೀರ್ ದಾರ್

ವ್ಯಾಖ್ಯಾನ : ಡಾ॥ ಎಚ್. ಎಸ್. ಸತ್ಯನಾರಾಯಣ

ನೇತೃತ್ವ– ಶ್ರೀಮತಿ ಶ್ರೀಮತಿ

01–03–2017 ರಂದು ಪ್ರತಿ ತಿಂಗಳ ಮೊದಲ ಬುಧವಾರ ನಡೆಯುವ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಮತ್ತು ವಾಗ್ದೇವಿ ಗಮಕ ಕಲಾ ಪ್ರತಿಷ್ಠಾನದ ಜಂಟಿ ಕಾರ್ಯಕ್ರಮವಾದ ಗಮಕವಾಹಿನಿ ಅಡಿಯಲ್ಲಿ ಶ್ರೀಮತಿ, ಶ್ರೀಮತಿಯವರ ನೇತೃತ್ವದಲ್ಲಿ "ಪಂಪಭಾರತ"ಗಮಕವಾಹಿನಿ–ಮಾಲೆಯನ್ನು ಹಮ್ಮಿಕೊಂಡಿದೆ. ಪಂಪಭಾರತದ ಸಂಗ್ರಹ ಡಾ॥ ಪಿ.ವಿ.ನಾರಾಯಣ ಅವರದು.

ಮೊದಲ ಕಂತಿನ ಭಾಗವಾಗಿ ಶಂತನು ವಿವಾಹ ಘಟ್ಟದವರೆಗೆ ವಿದ್ಯಾರ್ಥಿನಿ ಕುಮಾರಿ ದ್ಯುತಿ ಜಾಗೀರ್‌ದಾರ್ ಸುಶ್ರಾವ್ಯವಾಗಿ ವಾಚನ ಮಾಡಿ ಸಭಿಕರ ಮೆಚ್ಚುಗೆಗೆ ಪಾತ್ರಳಾದಳು.ವ್ಯಾಖ್ಯಾನದ ಭಾಗವನ್ನು ವ್ಯಾಖ್ಯಾನದಲ್ಲಿ ಪರಿಣಿತರಾದ ಡಾ॥ ಎಚ್.ಎಸ್. ಸತ್ಯನಾರಾಯಣ ಅವರು ನೀಡಿ ಗಮಕಾಸಕ್ತರ ಮೆಚ್ಚುಗೆ ಗಳಿಸಿದರು.

## ಕಾರ್ಟೂನ್ ಲೋಕ ಮಾರ್ಚ್ 2017ರ ವಿಶೇಷ ಕಾರ್‍ಯಕ್ರಮ

ವ್ಯಂಗ ಚಿತ್ರಕಾರ ಶ್ರೀ ಸಿ. ಶ್ರೀಧರ್ ಅವರು ನಡೆಸಿಕೊಟ್ಟ ವಿಶೇಷ ಕಾರ್ಯಕ್ರಮ– 4ನೇ ಮಾರ್ಚ್ 2017 "ನನ್ನ ಕಾರ್ಟೂನ್ ಲೋಕ"

ಮಾರ್ಚ್ 2017ರ ಹೊಂಗಸು ಸಂಚಿಕೆಯಲ್ಲಿ ಈಗಾಗಲೇ ಶ್ರೀ ಸಿ. ಶ್ರೀಧರ್ ಅವರ ಪರಿಚಯವನ್ನು ನೀಡಿದ್ದೇವೆ. ಈ ಕಾರ್‍ಯಕ್ರಮದ ವರದಿಯನ್ನು ಅದರ ಮುಂದುವರೆದ ಭಾಗವೆಂದು ಪರಿಗಣಿಸಬಹುದು. ಈ ಕಾರ್‍ಯಕ್ರಮಕ್ಕೆ ಶ್ರೀ ಶ್ರೀಧರ್ ಅವರು ಬಿಡಿಸಿದ ಕೆಲವು ಕಾರ್ಟೂನ್‌ಗಳನ್ನು ಮತ್ತು ಕ್ಯಾರಿಕೇಚರ್‌ಗಳನ್ನು ಪ್ರತಿಷ್ಠಾನದ ಸಭಾಂಗಣದಲ್ಲಿ ಪ್ರದರ್ಶನಕ್ಕೆ ಏರ್ಪಡಿಸಿದ್ದುದು ಒಂದು ವಿಶೇಷವಾದರೆ, ಈ ಕಾರ್‍ಯಕ್ರಮದಲ್ಲಿ ಯಾವ ರೀತಿಯ ಉಪನ್ಯಾಸವಿಲ್ಲದೆ, ಸಭಾಂಗಣದಲ್ಲಿ ಸಭಿಕರೊಂದಿಗೆ ಮುಕ್ತವಾಗಿ ಚರ್ಚೆ/ ಸಂವಾದಗಳೊಂದಿಗೆ ವ್ಯಂಗ್ಯ ಚಿತ್ರಗಳನ್ನು ಬಿಡಿಸುತ್ತಾ ಎಲ್ಲರ



ಮೆಚ್ಚುಗೆಗೆ ಪಾತ್ರರಾದರು. ಅವರು ಬಿಡಿಸಿದ ಕೆಲವು ರೇಖಾ ಚಿತ್ರಗಳು ಮತ್ತು ವರ್ಣಚಿತ್ರಗಳೂ ಪ್ರದರ್ಶನಗೊಂಡಿದ್ದವು. ಬಾಲ್ಯದಿಂದಲೂ ವ್ಯಂಗ ಚಿತ್ರಗಳ ಬಗ್ಗೆ ಒಲವು ಬೆಳೆಸಿಕೊಂಡಿದ್ದರೂ, ಕಾರಣಾಂತರಗಳಿಂದ ಅದು ಬಾಲ್ಯದಲ್ಲೂ ಮತ್ತು ನಂತರದ ದಿನಗಳಲ್ಲಿ ಹೊರಹೊಮ್ಮಲು ಅವಕಾಶ ವಿಲ್ಲದೆ, ಸುಪ್ತವಾಗಿ ಒಂದೆಡೆ ಹೆಪ್ಪುಗಟ್ಟಿ ನಿಂತದ್ದು ಮತ್ತು 2011ರಲ್ಲಿ ನಿವೃತ್ತಿಯ ನಂತರ ಅಡೆ ತಡೆಯಿಲ್ಲದೆ ಅವ್ಯಾಹತವಾಗಿ ನಡೆದುಕೊಂಡು ಬರುತ್ತಿರುವ ವಿಷಯವನ್ನು ಮತ್ತು ಈ ಕಲೆಯಿಂದ ತಮಗೆ ದೊರಕುತ್ತಿರುವ ಸಂತೋಷವನ್ನು ತಾವು ಅನುಭವಿಸುತ್ತಿರುವುದಾಗಿ ತಮ್ಮ ಅನಿಸಿಕೆಯನ್ನು ಹಂಚಿಕೊಂಡರು. ಸಭಿಕರಲ್ಲಿ ಕೆಲವರು ಬಿಡಿಸಿದ ರೇಖೆಗಳಿಂದ, ಸಂಖ್ಯೆಗಳಿಂದ, ಮತ್ತು ಅಕ್ಷರಗಳಿಂದ ವ್ಯಂಗ್ಯ ಚಿತ್ರಗಳನ್ನು ಕ್ಷಣಗಳಲ್ಲಿ ಬಿಡಿಸಿ, ಆಶ್ಚರ್ಯ ಮೂಡಿಸಿದರು. ವ್ಯಂಗ್ಯಚಿತ್ರಗಳು ಹುಟ್ಟುವ ಬಗೆಗಿನ ಪ್ರಶ್ನೆಯೊಂದಕ್ಕೆ ಅವರು ನೀಡಿದ ಉತ್ತರ : ನೆಟ್ ನ್ಯೂಸ್‌ನ ಸುದ್ದಿಗಳು, ಕೆಲವು ವ್ಯಕ್ತಿಗಳ ಹೇಳಿಕೆಗಳು, ಹೀಗೆ ಹಲವಾರು ಬಗೆಗಳಿಂದ ವ್ಯಂಗ್ಯಚಿತ್ರದ ಹುಟ್ಟಿಗೆ ಅವಕಾಶವಿದೆಯೆಂದು ಸೋಧಾಹರಣವಾಗಿ ವಿವರಿಸಿದರು.

ಡಾ. ಪಿ.ವಿ. ನಾರಾಯಣ ಅವರು ಕಲಾವಿದರಿಗೆ ಮತ್ತು ಸಭಿಕರಿಗೆ ಸ್ವಾಗತಕೋರಿ, ಕಲಾವಿದರ ಕಿರುಪರಿಚಯ ನೀಡಿದರು.

ಪ್ರೊ. ಜಿ. ಅಬ್ದುಲ್ ಬಷೀರ್, ವಂದನಾರ್ಪಣೆ ಸಲ್ಲಿಸಿದರು.

## ಕನ್ನಡ ಸಂಸ್ಕೃತಿ ದರ್ಶನ ಕಾರ್ಯಕ್ರಮ ಮಾಲೆ

ದಿನಾಂಕ 14–03–2017ರಂದು ಡಾ. ಪಿ. ಲಂಕೇಶ್ ಅವರ ಬಗ್ಗೆಯ ಸಾಕ್ಷ್ಯ ಚಿತ್ರವನ್ನು ಪ್ರದರ್ಶಿಸಲಾಯಿತು.ಡಾ. ಪಿ. ಲಂಕೇಶ್‌ಅವರು ಮಾರ್ಚ್ ತಿಂಗಳಿನಲ್ಲಿ ಜನಿಸಿದ್ದರು.ಅವರ ನೆನಪಿನಲ್ಲಿ ಈ ಸಾಕ್ಷ್ಯ ಚಿತ್ರವನ್ನು ಪ್ರದರ್ಶಿಸಲಾಯಿತು.

## ಅಕ್ಕರಗೊಟ್ಟಿ

### (ತಿಂಗಳ ಮುಕ್ತ ಸಾಂಸ್ಕೃತಿಕಚಿಂತನೆ)

9–03–2017

ವಿಷಯ :ಪ್ರಾಗಿತಿಹಾಸದ ಶೋಧನ ವಿಧಾನಗಳು.

ಚಾಲನೆ: ಶ್ರೀ ಸಿ. ಶಿವತಾರಕ್

ನಿವೃತ್ತ ಪ್ರಾಧ್ಯಾಪಕರು ಮತ್ತು ಪ್ರಾಚೀನ ಇತಿಹಾಸ ಮತ್ತು ಶಾಸನ ವಿಜ್ಞಾನದಲ್ಲಿ ಅಪಾರ ಅನುಭವ ಹೊಂದಿರುವ ಡಾ॥ ಕೆ.ಬಿ. ಶಿವತಾರಕ್ ಅವರು ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಮತ್ತು ಬ್ರಹ್ಮಾವರ, ದ.ಕ.ದಲ್ಲೂ ಸುದೀರ್ಘವಾದ ಸೇವೆ ಸಲ್ಲಿಸಿ, ಚಂದ್ರವಳ್ಳಿ ಮತ್ತು ಹಂಪಿಯ ಉತ್ಖನನದಲ್ಲೂ ಭಾಗ ವಹಿಸಿದ್ದರು. ತುಮಕೂರು ಜಿಲ್ಲೆಯ ಪುರಾತತ್ವ ಕುರುಹುಗಳು – ಒಂದು ಸಾಂಸ್ಕೃತಿಕ ಅಧ್ಯಯನ ಇವರ ಮಹಾಪ್ರಬಂಧ.ಇಂದಿಗೂ ಸಕ್ರಿಯವಾಗಿ ಸಂಶೋಧನಾ ಕ್ಷೇತ್ರದಲ್ಲಿ ತೊಡಗಿಸಿ ಕೊಂಡಿರುವ ಶ್ರೀಯುತರು, ಪ್ರಸ್ತುತ "ಕರ್ನಾಟಕ ಪ್ರಾಗಿತಿಹಾಸ ನೆಲೆಗಳ ವಿಸ್ತೃತ ಅಧ್ಯಯನವನ್ನು" ಕೈಗೊಂಡಿದ್ದಾರೆ. ಇವರು ಚರ್ಚೆಗೆ ಆರಿಸಿಕೊಂಡ "ಪ್ರಾಗಿತಿಹಾಸದ ಶೋಧನ ವಿಧಾನಗಳು" ಎಂಬ ವಿಷಯವು ಸಾಕಷ್ಟು ಇತಿಹಾಸಕ್ತರನ್ನು ಮತ್ತು ವಿದ್ವಾಂಸರನ್ನೂ ಚರ್ಚೆಯಲ್ಲಿ ಭಾಗವಹಿಸಲು ಅವಕಾಶ ಕಲ್ಪಿಸಿತ್ತು.



ಪ್ರಾಗಿತಿಹಾಸದ ಮಾನವನ ಅಲೆಮಾರಿ ಜೀವನ, ಬೇಟೆ, ವ್ಯವಸಾಯ/ ಕಸುಬು ಕಲ್ಲಿನ ಉಪಕರಣಗಳ ಬಳಕೆ, ಆದಿ ಹಳೇ ಶಿಲಾಯುಗದಿಂದ ಪ್ರಾರಂಭಗೊಂಡು ಲೋಹ / ಕಬ್ಬಿಣ ಯುಗದವರೆಗಿನ ವಿವಿಧ ಯುಗಗಳ ಕಾಲ ಘಟ್ಟಗಳ ಮಾಹಿತಿ, ಪ್ರಾಗತಿಹಾಸದ ಪಿತಾಮಹನೆಂದೇ ಖ್ಯಾತಿ ಪಡೆದ ರಾಬರ್ಟ್ ಬ್ರೂಸನು ಕೈಗೊಂಡ ನೆಲೆಗಳ ಸಂಶೋಧನೆ, ಹೀಗೆ ಹಲವಾರು ವಿಷಯಗಳನ್ನೊಳಗೊಂಡ ಪೀಠಿಕೆಯೇ ದೀರ್ಘವಾದ ಕಾರಣ, ಶ್ರೀಯುತರಿಗೆ ಸಭಿಕರೊಂದಿಗೆ ಚರ್ಚೆಗೆ ಸಂವಾದಕ್ಕೆ ಅವಕಾಶವಿಲ್ಲದಂತಾಯಿತು. ಮುಂಬರುವ ತಿಂಗಳಿನಲ್ಲಿ ಶ್ರೀಯುತರು ಚರ್ಚೆಗೆ/ಜಿಜ್ಞಾಸೆಗೆ ತೆಗೆದುಕೊಳ್ಳುವ ಅಂಶವನ್ನು ಕುರಿತು ಮಾತನಾಡಲು ಮತ್ತೊಂದು ಅವಕಾಶವನ್ನು ಕಲ್ಪಿಸಿಬೇಕೆಂಬ ಅಭಿಪ್ರಾಯ ವ್ಯಕ್ತವಾಯಿತು. ಕಾರ್ಯಕ್ರಮದ ಆರಂಭದಲ್ಲಿ ಡಾ.ಪಿ.ವಿ.ನಾರಾಯಣ ಅವರು ಸಭೆಗೆ ಡಾ॥ ಶಿವತಾರಕ್‌ರವರನ್ನು ಪರಿಚಯಿಸಿ, ಎಲ್ಲರಿಗೂ ಸ್ವಾಗತ ಕೋರಿದರು. ಪ್ರೊ.ಅಬ್ದುಲ್ ಬಷೀರ್ ಅವರ ವಂದನಾರ್ಪಣೆಯೊಂದಿಗೆ ಕಾರ್ಯಕ್ರಮ ಮುಕ್ತಾಯವಾಯಿತು. ಈ ಕುರಿತು ನಡೆದ ಅರ್ಥಪೂರ್ಣ ಚರ್ಚೆಯಲ್ಲಿ ಡಾ. ಪಿ.ವಿ. ನಾರಾಯಣ, ಪ್ರೊ.ಅಶ್ವತ್ಥನಾರಾಯಣ, ಪ್ರೊ. ಶ್ರೀಪಾದ ಭಟ್, ಪ್ರೊ.ಅಬ್ದುಲ್ ಬಶೀರ್, ಶ್ರೀ ಸುಬ್ರಮಣ್ಯ, ಶ್ರೀರಾಮಮೂರ್ತಿ, ಡಾ॥ ಲಕ್ಷ್ಮೀನಾರಾಯಣ, ಡಾ॥ ಎಂ.ಜಿ.ನಾಗರಾಜ್, ಪ್ರೊ ಶೇಷಗಿರಿರಾವ್, ಶ್ರೀ ರವೀಂದ್ರನಾಥ್, ಶ್ರೀ ವೆಂಕಟರಮಣಯ್ಯ, ಶ್ರೀಮತಿ ನಳಿನಿ ವೆಂಕಟೇಶ, ಶ್ರೀಮತಿ ಭಾರತಿ ಮುಂತಾದವರು ಭಾಗವಹಿಸಿದ್ದರು.

## 11–03–2017 ಪಂಡಿತ್ ಟಿ. ಆರ್. ರಾಮಣ್ಣ ಮತ್ತು ಶ್ರೀಮತಿ ಪುಟ್ಟಮ್ಮ ದತ್ತಿ ಕಾರ್ಯಕ್ರಮ

ವಿಷಯ : ರಾಘವಾಂಕನ ಹರಿಶ್ಚಂದ್ರ ಕಾವ್ಯ

ಉಪನ್ಯಾಸಕರು: ಡಾ॥ ಬಿ.ನಂಜುಂಡ ಸ್ವಾಮಿ, ಆಯುರ್ವೇದಿಕ್ ಪಂಡಿತರು, ತುಮಕೂರು

ಕನ್ನಡ ಪಂಡಿರಾದ ಶ್ರೀ ಓ.ಆರ್.ರಾಮಣ್ಣ ಅವರು ತುಮಕೂರಿನಲ್ಲಿ ಹೆಸರಾಂತ ಕನ್ನಡ ಮತ್ತು ಸಂಸ್ಕೃತ ವಿದ್ವಾಂಸರಾಗಿದ್ದರು. ಅವರ ಮಾರ್ಗದರ್ಶನದಲ್ಲಿ ಕಲಿತ ಕೆಲವು ವಿದ್ಯಾರ್ಥಿಗಳು ಇಂದಿಗೂ ಅವರ ಪಾಠ ಮಾಡುವ ವಿಧಾನವನ್ನು ಸ್ಮರಿಸುತ್ತಾರೆ. ಅಂತಹ ವಿದ್ಯಾರ್ಥಿಗಳ ಸಮೂಹದಲ್ಲಿ ಪಂಡಿತರಿಗೆ ಅಚ್ಚುಮೆಚ್ಚಿನ ಶಿಷ್ಯನಾದ, ಡಾ॥ಬಿ.ನಂಜುಂಡಸ್ವಾಮಿ ಅವರೂ ಒಬ್ಬರು. ರಾಮಣ್ಣ ಪಂಡಿತರು ಭಾರತ ವಾಚನವನ್ನೂ ಸಹ ಮಾಡುತ್ತಿದ್ದರು. ಸಾಮಾನ್ಯ ಜನರಿಗೂ ಷಟ್ಪದಿ ಕಾವ್ಯಗಳ ವಿಶೇಷತೆ, ಶೈಲಿ ಮತ್ತು ಷಟ್ಪದಿ ಕಾವ್ಯಗಳ ಪರಿಚಯವನ್ನು ಮಾಡುವುದರಲ್ಲಿ ಅವರಿಗೆ ವಿಶೇಷ ಉತ್ಸಾಹ ಮತ್ತು ಇದಕ್ಕೆ ಕಾರಣ ಷಟ್ಪದಿ ಕಾವ್ಯಗಳಲ್ಲಿ ಅವರಿಗೆ ಇದ್ದ ಅಪಾರ ಒಲವು, ಕಾವ್ಯವಾಚನ ಅವರ ಹವ್ಯಾಸವಾಗಿತ್ತು. ಶ್ರೀ ಓ.ಆರ್. ರಾಮಣ್ಣ ಅವರ ಸುಪುತ್ರ ಹಾಗೂ ನಮ್ಮ ಪ್ರತಿಷ್ಠಾನದ ಸದಸ್ಯರಾಗಿರುವ, ಹೆಸರಾಂತ ಕನ್ನಡ ಪ್ರಾಧ್ಯಾಪಕರು ಮತ್ತು ವಿಶ್ವವಿದ್ಯಾಲಯಗಳ ದಕ್ಷ ಆಡಳಿತಗಾರರೆಂದು ಗುರುತಿಸಿಕೊಂಡ ಡಾ॥ ಆರ್. ಲಕ್ಷೀನಾರಾಯಣ ಹಾಗೂ ಅವರ ಕುಟುಂಬದವರು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ಪಂಡಿತ ರಾಮಣ್ಣ ಅವರ ಹೆಸರಿನಲ್ಲಿ ಒಂದು ದತ್ತಿಯೊಂದನ್ನು ಸ್ಥಾಪಿಸಬೇಕೆಂಬ ಹೆಬ್ಬಯಕೆ, ಡಾ॥ ಲಕ್ಷ್ಮೀನಾರಾಯಣ ಅವರ ಮನಸ್ಸಿನಲ್ಲಿ ಇದ್ದರೂ, ಈ ಹಿಂದೆ ಅವಕಾಶ ಕೂಡಿಬರದೆ ಅಥವಾ ಕಾರ್ಯರೂಪಕ್ಕೆ ತರಲು ಸಾಧ್ಯವಾಗಿರಲಿಲ್ಲ. ರಾಮಣ್ಣ ಅದರ ಕುಟುಂಬದವರೆಲ್ಲರ ಬದ್ಧತೆಯಿಂದ ಇಂದು ಅದು ಕೈಗೂಡಿ ಕಾರ್ಯರೂಪಕ್ಕೆ ಬರುವಂತಾಯಿತು.

ಪಂಡಿತ್ ಟಿ. ಆರ್. ರಾಮಣ್ಣ ಮತ್ತು ಶ್ರೀಮತಿ ಪುಟ್ಟಮ್ಮ ದತ್ತಿ ಕಾರ್ಯಕ್ರಮದ ಅಡಿಯಲ್ಲಿ ಕನ್ನಡದ ಷಟ್ಪದಿ ಕಾವ್ಯದ ಜನಕನೆಂದೇ ಖ್ಯಾತಿ ಗಳಿಸಿದ ರಾಘವಾಂಕನ ಹರಿಶ್ಚಂದ್ರ ಕಾವ್ಯವನ್ನೇ ಆರಿಸಿ ಪಂಡಿತ ರಾಮಣ್ಣನವರ ನೆಚ್ಚಿನ ಶಿಷ್ಯ ಡಾ॥ ಬಿ.ನಂಜುಂಡ ಸ್ವಾಮಿ ಅವರು ಹರಿಶ್ಚಂದ್ರ ಕಾವ್ಯದ ಬಗ್ಗೆ ಪ್ರಥಮ ಉಪನ್ಯಾಸವನ್ನು ನೀಡಿದರು .ಡಾ॥ ಬಿ.ನಂಜುಂಡ ಸ್ವಾಮಿ ಅವರು ಈ ಅವಕಾಶವು ತಮಗೆ ಒದಗಿ ಬಂದುದೇ ಒಂದು ಭಾಗ್ಯವೆಂದು ಪರಿಗಣಿಸಿ ಅವರ ಉಪಾಧ್ಯಾಯರನ್ನು ಮತ್ತು ಕೆಲವು ಅವರೊಂದಿಗಿನ ಒಡನಾಟದ ತುಣುಕುಗಳನ್ನೂ ಸಭಿಕರೊಂದಿಗೆ ಹಂಚಿಕೊಂಡರು. ಕಾವ್ಯದ ಕೆಲವು ಭಾಗಗಳನ್ನು ಓದಿ, ಅರ್ಥೈಸಿ ಸಮಯೋಚಿತವಾಗಿ ವ್ಯಾಖ್ಯಾನ ನೀಡಿ, ಕಾರ್ಯಕ್ರಮವನ್ನು ಯಶಸ್ವಿಯಾಗಿ ನಡೆಸಿಕೊಟ್ಟರು. ಕಾರ್ಯಕ್ರಮದ ಪ್ರಾರಂಭದಲ್ಲಿ ಉಪನ್ಯಾಸಕರನ್ನು ಡಾ॥ ಪಿ.ವಿ.ನಾರಾಯಣ ಅವರು ಪರಿಚಯಿಸಿದರು. ಪ್ರೊ॥ ಜಿ. ಅಬ್ದುಲ್ ಬಷೀರ್ ಅವರು ವಂದನಾರ್ಪಣೆ ಮಾಡಿದರು.



# ಪದಚರಿತೆ

## ಒಂದಷ್ಟು ಪದಗಳ ಮೂಲಚೂಲಗಳ ಹುಡುಕಾಟ

–ಡಾ.ಪಿ.ವಿ. ನಾರಾಯಣ

ಕೃಷಿ: ಕೃಷಿ ಎಂಬ ಸಂಸ್ಕೃತ ಪದಕ್ಕೆ ಬೇಸಾಯ ಎಂಬ ಅರ್ಥವಿದೆ. ಕೃಷಿಕ ಎಂಬುದು ರೈತ ಮತ್ತು ನೇಗಿಲ ಗುಳ ಎರಡನ್ನೂ ಸೂಚಿಸುತದೆ. ಕೃಷೀವಲ ಎಂದರೂ ರೈತನೇ. ಪಂಪನ 'ಆದಿಪುರಾಣ'ದಲ್ಲಿ ಈ ಕೃಷಿ, ಕೃಷೀವಲ ಎರಡೂ ಒಂದೆಡೆಯೇ ಸಿಕ್ಕುತ್ತವೆ: "ಕೃಷೀವಲ ಕುಲೋಚಿತಮಪ್ಪ ಕೃಷಿಯುಮಂ". ನಾಗವರ್ಮನ 'ಅಭಿಧಾನ ವಸ್ತುಕೋಶ'ವೆಂಬ ನಿಘಂಟಿನಲ್ಲಿ "ಕೃಷಿಕಂ ಕ್ಷೇತ್ರಾಜೀವಂ, ಕೃಷೀವಳಂ ಕರ್ಷಕಂ, ಕುಟುಂಬಿನಿಯೆನಿಕ್ಕುಂ, ಕೃಷಿ ತತ್ಕರ್ಮಮದಕ್ಕುಂ" ಎಂಬ ವಿವರಣೆಯಿದೆ.ಕೃಷಿಯಲ್ಲಿ ತೊಡಗಿದವನೇ ಕೃಷಿನಿರತ ("ಕೃಷಿನಿರತನಂತೆ ರಾಸಿಯಂ ನಿಲಿಸಿ" – ಶಾಂತಿನಾಥನ 'ಸುಕುಮಾರಚರಿತೆ').ಅದರಲ್ಲಿ ಆಸಕ್ತಿ ತಾಳಿದವನೇ 'ಕೃಷಿಕುತೂಹಳ' ("ಕೃಷೀಕುತೂಹಳಜನಂ ಮರವಟ್ಟಿರುತಿರ್ದುದು" – ಕಮಲಭವನ 'ಶಾಂತೀಶ್ವರಪುರಾಣ").ಕೃಷಿ ಶಬ್ದಕ್ಕಿರುವ ಬೇಸಾಯ ಎಂಬ ಅರ್ಥವು ವಿಸ್ತಾರಗೊಂಡು ಯಾವುದೇ ರಂಗದಲ್ಲಿಮಾಡುವ ಸಾಧನೆ ಎಂಬುದನ್ನು ಸೂಚಿಸುವ ಪದವಾಗಿದೆ; ಸಾಹಿತ್ಯಕೃಷಿ ಎಂಬಂತೆ.ಮೋಳಿಗೆ ಮಾರಯ್ಯನ ವಚನದವೊಂದರಲ್ಲಿ "ವಾಣಿಜ್ಯ ಮುಂತಾದ ಕೃಷಿಯ ಮಾಡುವಾಗ" ಎಂಬ ಮಾತಿದೆ.

ಬೇಸಾಯದ ಆರಂಭದ ಬಗ್ಗೆ ಪಂಪನ 'ಆದಿಪುರಾಣ'ವು ಕೆಲವು ಕುತೂಹಲಕರ ವಿವರಗಳನ್ನು ಒಳಗೊಂಡಿದೆ. ಅದು ಆದಿ ತೀರ್ಥಂಕರನ ತಂದೆಯಾದ ನಾಭಿರಾಜನ ಆಳ್ವಿಕೆಯ ಕಾಲ. ಪ್ರಕೃತಿಯಲ್ಲಿ ಸಿಕ್ಕುವುದನ್ನೇ ಅವಲಂಬಿಸಿದ್ದ ಜನರಿಗೆ ಬರಬರುತ್ತ ಬೇಕಾದಷ್ಟು ಆಹಾರ ಸಿಗುತ್ತಿರಲಿಲ್ಲ. ಅಕೃಷ್ಟಪಚ್ಯ(ಬೇಸಾಯವಿಲ್ಲದೆ ತಾವಾಗಿ ಬೆಳೆದ ಆಹಾರಧಾನ್ಯ)ಗಳನ್ನು ಅವರು ಹುಲ್ಲುಗಳೆಂದು ತಿಳಿದಿದ್ದರು. ಜನ ನಾಭಿಯಲ್ಲಿಗೆ ಬಂದಾಗ, ಅಕೃಷ್ಟಪಚ್ಯಗಳ ಧಾನ್ಯವನ್ನು ಪಡೆದು, ಸಂಸ್ಕಾರ ಮಾಡಿ ಸೇವಿಸುವ ಬಗೆಯನ್ನು ಆತ ಜನರಿಗೆ ತಿಳಿಸಿಕೊಟ್ಟನಂತೆ. ಮುಂದೆ ಅವನ ಮಗ ಆದಿದೇವನ ಕಾಲದ ಹೊತ್ತಿಗೆ ಅದೂ ಸಾಲದೆ ಹೋಯಿತು. ಆಗ ಆದಿದೇವನು ಜನರನ್ನು ವರ್ಣಗಳಾಗಿ ವಿಂಗಡಿಸಿ, ವೈಶ್ಯವರ್ಗಕ್ಕೆ "ಪಾಶುಪಾಲ್ಯ ಕೃಷೀ ಪಣ್ಯಕರ್ಮ"ಗಳನ್ನು ನಿಯೋಜಿಸಿದನಂತೆ.ಆಗಿನಿಂದ ಭೋಗಭೂಮಿಯಾಗಿದ್ದುದು ಕರ್ಮಭೂಮಿಯಾಯಿತಂತೆ; ಕೃತಯುಗ ಆರಂಭಗೊಂಡಿತಂತೆ.

# ಹುಟ್ಟು ಹಬ್ಬದ ಶುಭಾಶಯಗಳು

ಇದುವರೆಗೆ ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನದ ಸದಸ್ಯರ ಹುಟ್ಟುಹಬ್ಬ ಬರುವ ತಿಂಗಳುಗಳಲ್ಲಿ ಜನಿಸಿದ ಸದಸ್ಯರಿಗೆ ಪ್ರತ್ಯೇಕವಾಗಿ ಶುಭಾಶಯಗಳನ್ನು ಪತ್ರ ಮುಖೇನ ಕಳುಹಿಸಲಾಗುತ್ತಿತ್ತು. ಆದರೆ ನಮ್ಮ ಪ್ರತಿಷ್ಠಾನದ ಸದಸ್ಯರಿಗೆ ಜನ್ಮ ದಿನದಂದ ಶುಭಾಶಯಗಳನ್ನು ತಿಳಿಸಬೇಕೆಂಬ ಆಶಯವನ್ನು ಹಲವಾರು ಸದಸ್ಯರು ವ್ಯಕ್ತಪಡಿಸಿದ ಕಾರಣದಿಂದ ಈ ತಿಂಗಳಿನಿಂದ ಹುಟ್ಟು ಹಬ್ಬವನ್ನು ಆಚರಿಸಿಕೊಳ್ಳುವ ಸದಸ್ಯರ ಹೆಸರು ಹಾಗೂ ಜನ್ಮ ದಿನಾಂಕಗಳನ್ನು ಪ್ರಕಟಿಸುತ್ತಿದ್ದೇವೆ. ಏಪ್ರಿಲ್ ತಿಂಗಳಿನಲ್ಲಿ ಹುಟ್ಟುಹಬ್ಬ ಆಚರಿಸಿಕೊಳ್ಳುತ್ತಿರುವ ಈ ಕೆಳಕಂಡ ಸದಸ್ಯರಿಗೆ ಹೊಂಗನಸು ವತಿಯಿಂದ ಹುಟ್ಟುಹಬ್ಬದ ಶುಭಾಶಯಗಳು

| | |
|---|---|
| 1ನೇ ಏಪ್ರಿಲ್ : | ಶ್ರೀ ಮಾದೇಶ್‌ಎನ್ |
| | ಡಾ. ಮಾಧವರಟ್ಟೀಹಳ್ಳಿ |
| 2ನೇ ಏಪ್ರಿಲ್ : | ಡಾ.ವೈ.ಎಸ್. ಶಿವಪ್ರಸಾದ್ |
| 3ನೇ ಏಪ್ರಿಲ್ : | ಡಾ. ಎಸ್. ದಯಾನಂದಕುಮಾರ್ |
| 5ನೇ ಏಪ್ರಿಲ್ : | ಶ್ರೀ ನಿ.ನಾ.ಶೇಷಾದ್ರಿ |
| | ಶ್ರೀ ಬೇಲಿ ಹನುಮಂತರಾವ್ ಶ್ರೀಧರ್, |
| | ಶ್ರೀ ಎಸ್. ರಾಮಲಿಂಗೇಶ್ವರ (ಸಿಸಿರ) |
| | ಶ್ರೀ ಸುಬ್ರಾಯ ಹೆಗಡೆ |
| 8ನೇ ಏಪ್ರಿಲ್ : | ಶ್ರೀ ಎನ್. ರವೀಂದ್ರನಾಥ್ |
| | ಡಾ॥ ಸಿ.ಪಿ. ಕೃಷ್ಣಕುಮಾರ್ |
| | ಡಾ. ಎನ್. ಗೋಪಾಲಕೃಷ್ಣ |
| 9ನೇ ಏಪ್ರಿಲ್ : | ಶ್ರೀಮತಿ ಲಕ್ಷ್ಮೀಎನ್. ಮೂರ್ತಿ |
| 14ನೇ ಏಪ್ರಿಲ್ : | ಶ್ರೀವಿ.ಜಿ.ನಾಗೇಂದ್ರ |
| 15ನೇ ಏಪ್ರಿಲ್ : | ಶ್ರೀಮಾಕನೂರು ಸೀತಾರಾಂ ಸುರೇಂದ್ರ |
| | ಶ್ರೀಮತಿ ರಶ್ಮಿ ಕೆ.ಜಿ. |
| 16ನೇ ಏಪ್ರಿಲ್ : | ಶ್ರೀ ಸಿ.ವಿ. ತಿರುಮಲ ರಾವ್ |
| | ಶ್ರೀ ಬಿ.ವಿ. ಭೋಜರಾಜ |
| 19ನೇ ಏಪ್ರಿಲ್ : | ಶ್ರೀ ಯು.ಎಸ್. ಶ್ರೀಧರ ಆರಾಧ್ಯ |
| 23ನೇ ಏಪ್ರಿಲ್ : | ಶ್ರೀ ಎನ್.ಎಸ್. ರಘುನಾಥ್ |
| 24ನೇ ಏಪ್ರಿಲ್ : | ಶ್ರೀಮತಿ ವಿದ್ಯಾಶ್ರೀ ಆರ್. |
| 25ನೇ ಏಪ್ರಿಲ್ : | ಶ್ರೀ ರುದ್ರಮುನಿ.ಪಿ |
| | ಶ್ರೀ ಎಸ್.ಟಿ. ರಾಧಾಕೃಷ್ಣ |
| 28ನೇ ಏಪ್ರಿಲ್ : | ಶ್ರೀ ಅಂಬರೀಶ. ವಿ. |
| | ಶ್ರೀಮತಿ ಕೆ.ವಿ. ರಾಜೇಶ್ವರಿ |

## ಡಾ॥ ಜಿ. ಆರ್. ತಿಪ್ಪೇಸ್ವಾಮಿ



ಡಾ. ಜಿ.ಆರ್. ತಿಪ್ಪೇಸ್ವಾಮಿ ಅವರು ತುಮಕೂರು ಜಿಲ್ಲೆ ಪಾವಗಡ ತಾಲ್ಲೂಕು ಗುಜ್ಜನಡು(ಎ.ಎಚ್. ಪಾಳ್ಯ) ಎಂಬ ಹಳ್ಳಿಯಲ್ಲಿ 28–10–1958ರಲ್ಲಿ ಜನಿಸಿದರು. 1977ರಲ್ಲಿ ಕನ್ನಡ ಎಂ.ಎ. ಪಡೆದ (ಮೈ.ವಿ.ವಿ) ತಿಪ್ಪೇ ಸ್ವಾಮಿಯವರು 'ಮೈಸೂರು ಚಾಮುಂಡಿ; ಒಂದು ಅಧ್ಯಯನ' ಎಂಬ ವಿಷಯದ ಬಗ್ಗೆ 1995 ರಲ್ಲಿ ಪಿಎಚ್.ಡಿ, ಪದವಿಯನ್ನು ಪಡೆದರು. ತಿಪ್ಪೇಸ್ವಾಮಿಯವರು ಮೈಸೂರು ವಿಶ್ವವಿದ್ಯಾಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ ಇತ್ತೀಚೆಗೆ ನಿವೃತ್ತರಾಗಿದ್ದಾರೆ.

ಶ್ರೀಯುತರು ಪಿಎಚ್.ಡಿ ಮತ್ತು ಎಂ.ಫಿಲ್ ವಿದ್ಯಾರ್ಥಿಗಳಿಗೆ(20) ಮಾರ್ಗದರ್ಶಕರಾಗಿದ್ದರು. ಅನೇಕ ಸಾಹಿತ್ಯಸಂಶೋಧನಾ ಯೋಜನೆಗಳಲ್ಲಿ ಸಹಾಯಕ ಸಂಪಾದಕರಾಗಿ, ಸಂಪುಟ ಸಂಪಾದಕರಾಗಿ; ಗೌರವ ಸದಸ್ಯರಾಗಿ, ಸಂಪನ್ಮೂಲ ವ್ಯಕ್ತಿಗಳಾಗಿ, ಕೋ–ಆರ್ಡಿನೇಟರ್ ಆಗಿ, ಅನೇಕ ಪರೀಕ್ಷಾ ಮಂಡಳಿಗಳ ಸದಸ್ಯರಾಗಿ, ಅಧ್ಯಕ್ಷರಾಗಿ ಸೇವೆ ಸಲ್ಲಿಸಿ ಅಪಾರ ಅನುಭವ ಪಡೆದಿದ್ದಾರೆ. ಡಾ॥ ಆರ್. ತಿಪ್ಪೇಸ್ವಾಮಿ ಅವರು ಈವರೆಗೆ ಐವತ್ತೆಂಟು ಗ್ರಂಥಗಳನ್ನು ಹೊರತಂದಿದ್ದಾರೆ. ಹೊನ್ನಪ್ಪ ಭಾಗವತರ್, ಪ್ರಸ್ತಾಪ, ಪ್ರಣೇತ, ಅಭಿಮುಖ, ಸಾಹಿತ್ಯ ಮತ್ತು ಕ್ರಿಯಾಶೀಲತೆ ಬಂದೀರ ನನ್ನ ಜಡೆವೊಳಗೆ, ದಾಸ ಸಾಹಿತ್ಯ ಮತ್ತು ಜಾನಪದ, ಜಾನಪದ ಸಿದ್ಧಾಂತಗಳು ಅಗ್ನಿಸಾಕ್ಷಿ, ವಿಚಾರ ಸಾಹಿತ್ಯ ಮುಂತಾದವು. ನಾಡಿನ ಕನ್ನಡಪರಸಂಘ, ಸಂಸ್ಥೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಶ್ರೀಯುತರು 400 ಕ್ಕೂ ಸಂಶೋಧನ ಲೇಖನಗಳನ್ನು ಪ್ರಕಟಿಸಿದ್ದಾರೆ.

2017 ರ ಪ್ರಥಮ 'ಪ್ರೊ.ಎಲ್.ಎಸ್. ಶೇಷಗಿರಿರಾವ್ ವಿಮರ್ಶಾ ಪ್ರಶಸ್ತಿ' ಗೆ ಭಾಜನರಾಗಿರುವ ಶ್ರೀಯುತರಿಗೆ ನಮ್ಮ ಹಾರ್ದಿಕ ಅಭಿನಂದನೆಗಳು.

# 20-02-2017 ಡಾ. ಎಂ.ಎ. ಜಯಚಂದ್ರ ದತ್ತಿ ಕಾರ್ಯಕ್ರಮ



ಉಪನ್ಯಾಸಕರು : ಡಾ. ಜೆ. ಶ್ರೀನಿವಾಸ ಮೂರ್ತಿ, ಸಂಸ್ಕೃತ ಪ್ರಾಧ್ಯಾಪಕರು

ವಿಷಯ :'ಭಾಷೆ ಮತ್ತು ಕಾವ್ಯದ ಬಗ್ಗೆ ಜೈನ ಚಿಂತನೆಗಳು'

ಪ್ರೊ.ಜೆ. ಶ್ರೀನಿವಾಸ ಮೂರ್ತಿ ಅವರು ಸಂಸ್ಕೃತ ಪ್ರಾಧ್ಯಾಪಕರಾಗಿ ಸೇವೆಸಲ್ಲಿಸುತ್ತಿದ್ದಾರೆ. ಉಪನ್ಯಾಸದ ಆರಂಭಕ್ಕೆ ಮುನ್ನ ಸಭೆಗೆ ಉಪನ್ಯಾಸಕರ ಪರಿಚಯವನ್ನು ಪ್ರೊ॥ ಅಬ್ದುಲ್ ಬಷೀರ್, ಮಾಡಿಕೊಟ್ಟು ಎಲ್ಲರಿಗೂ ಸ್ವಾಗತಕೋರಿದರು.

ದೇಶ, ಕಾಲ, ಪರಿಸರ ಈ ಮೂರು ಆಯಾಮಗಳು, ಹಿಂದಿನಿಂದಲೂ ಸಾಮಾಜಿಕ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಚಲನ ಶೀಲತೆಯನ್ನುಂಟು ಮಾಡಿದೆ.ಈಗಲೂ ಮಾಡುತ್ತಿದೆ ಮತ್ತೆ ಇನ್ನು ಮುಂದೆಯೂ ಮಾಡುವುದರಲ್ಲಿ ಏನೂ ಸಂದೇಹವಿಲ್ಲ. ಮತ, ಧರ್ಮಗಳಿಗೂ ಮತ್ತು ಭಾಷೆಗೂ ಇರುವ ನಂಟು ಜನ್ಯ ಜನಕವಾದುದಲ್ಲ. ಕೇವಲ ಸಾಂದರ್ಭಿಕವಾಗಿ ಒದಗಿಬಂದ ಸಂಬಂಧ.ಆದರೂ ಕನ್ನಡಕ್ಕೂ ಮತ್ತು ಜೈನ ಧರ್ಮಕ್ಕೂ ಇರುವ ನಿಕಟಸಂಬಂಧವನ್ನು ಗಮನಿಸಿದರೆ, ಅದು ಜನ್ಯಜನಕವಾದ ಅವಿನಾತ್ಮಕ ಸಂಬಂಧವಿರಬಹುದೆಂಬ ನಿಲುವಿಗೆ ಬರಬಹುದು. ಜೈನ ಧರ್ಮದ ಶ್ರಾವಕ-ಶ್ರಾವಕಿಯರ, ಶ್ರಮಣ-ಶ್ರಮಣಿಯರು, ಆರಸುವರ್ಗದವರು, ಆಡಳಿತಾಧಿಕಾರಿಗಳು, ಶ್ರೀ ಸಾಮಾನ್ಯರು, ಎಲ್ಲರೂ, ತಾವು ನೆಲಸಿದ ಪ್ರದೇಶದಲ್ಲಿನ ಸಾಂಸ್ಕೃತಿಕ ಪರಿಸರಕ್ಕೆ ಸ್ಪಂದಿಸಿ, ಅಲ್ಲಿನ ಭಾಷೆಗೆ ಮೇಳೈಸಿ ಘರ್ಷಣೆಗೆ ಅವಕಾಶವಾಗದ ಹಾಗೆ, ಆಯಾ ಪರಿಸರದ ಭಾಷೆಯನ್ನು ಗ್ರಂಥಸ್ಥ ಭಾಷೆಯಾಗಿ ಮಾರ್ಪಡಿಸುವಲ್ಲಿ ತೊಡಗಿಕೊಂಡು ಯಶಸ್ಸನ್ನು ಕಂಡವರು.

ಸೋದಾಹರಣವಾಗಿ ಉಪನ್ಯಾಸಕರು, ಜೈನಧರ್ಮದ ಸಾಹಿತ್ಯದಲ್ಲಿ ಜನಪದ ಸಾಹಿತ್ಯ, ಹಾಡು, ಕಥೆಗಳು ಉಪಲಬ್ಧವಿರುವುದನ್ನು ಮತ್ತು ಡಾ॥ ಎಂ.ಎ.ಜಯಚಂದ್ರರ ಮಹಾ ಪ್ರಬಂಧವನ್ನು ಉಲ್ಲೇಖಿಸಿದರು. ಕನ್ನಡದ ಶ್ರೇಷ್ಠ ಗದ್ಯ ಕೃತಿಯಾದ ವಡ್ಡಾರಾಧನೆ, ಕವಿರಾಜ ಮಾರ್ಗದಲ್ಲಿ ಪ್ರಸ್ತಾಪವಾಗಿರುವ ಚಾರಿತ್ರಿಕ, ಸಾಂಸ್ಕೃತಿಕ, ಸಾಹಿತ್ಯಕ ಮತ್ತು ಧಾರ್ಮಿಕ ಮಹತ್ವಗಳನ್ನು ಭಾಷೆಯ ಸೊಗಡನ್ನೂ ಉಪನ್ಯಾಸಕರು ವಿವರಿಸಿದರು.

ಕಾರ್ಯಕ್ರಮದ ಕೊನೆಯಲ್ಲಿ ಪ್ರೊ. ಜಿ. ಅಬ್ದುಲ್ ಬಷೀರ್ ವಂದನೆ ಸಲ್ಲಿಸಿದರು.

ಕಿರು ಪರಿಚಯ

**ಬಿ.ಟಿ. ಜಾಹ್ನವಿ**



ಖ್ಯಾತ ನೇತ್ರ ತಜ್ಞರು, ಕರ್ನಾಟಕ ವಿಧಾನಸಭೆಯ ಹಾಗು ಕರ್ನಾಟಕ ಲೋಕಸೇವಾ ಆಯೋಗದ ಮಾಜಿ ಸದಸ್ಯರೂ ಆಗಿದ್ದಂತಹ ಡಾ. ಬಿ. ಎಂ. ತಿಪ್ಪೇಸ್ವಾಮಿ ಹಾಗು ಸಿ. ಕೆ. ಯಲ್ಲಮ್ಮ ಇವರ ಮಗಳಾಗಿ 26.11.1963 ಬೆಂಗಳೂರಿನಲ್ಲಿ ಜನನ. ದಾವಣಗೆರೆಯ ಸೇಂಟ್ ಪಾಲ್ಸ್ ಕಾನ್ವೆಂಟ್ ಶಾಲೆಯಲ್ಲಿ ಹಾಗು ಎ ವಿ ಕಮಲಮ್ಮ ಕಾಲೇಜಿನಲ್ಲಿ ವಿದ್ಯಾಭ್ಯಾಸ. ಮಗ ವಿಕಾಸ ಮತ್ತು ಪತಿ ನಿರಂಜನರೊಡನೆ ದಾವಣಗೆರೆ ವಿದ್ಯಾನಗರದಲ್ಲಿ ವಾಸ. ವಾರ್ತಾಭಾರತಿ ದಿನಪತ್ರಿಕೆ ಹಾಗು ದಾವಣಗೆರೆಯ ಜನತಾವಾಣಿ ಪತ್ರಿಕೆಯಲ್ಲಿ ಅಂಕಣ ಬರಹ, ನಾಡಿನ ಸುಧಾ. ತರಂಗ. ಉದಯವಾಣಿ, ಪ್ರಜಾವಾಣಿ ದೀಪಾವಳಿ ವಿಶೇಷಾಂಕ, ಸಂವಾದ, ಹೊಸಮನುಷ್ಯ, ಮಯೂರ, ಸಂವಾದಿ ಹೀಗೆ ಅನೇಕ ಪತ್ರಿಕೆಗಳಲ್ಲಿ ಕಥೆಗಳು. ಲೇಖನಗಳು ಪ್ರಕಟಗೊಂಡಿವೆ. ಮೂವತ್ತಕ್ಕೂ ಹೆಚ್ಚು ಸಣ್ಣ ಕಥೆಗಳು, 'ಕಳೆದುಕೊಂಡವಳು ಹಾಗು ಇತರ ಕಥೆಗಳು' ಮತ್ತು 'ಹುಡುಕಾಟ' ಇವರ ಎರಡು ಕಥಾಸಂಕಲನಗಳು. ತಂದೆ ಡಾ. ಬಿ ಎಂ ತಿಪ್ಪೇಸ್ವಾಮಿಯವರನ್ನು ಕುರಿತು 'ಮುಟ್ಟಿಸಿಕೊಂಡವರು' ಎಂಬ ಕೃತಿಯನ್ನು ಸಂಪಾದಿಸಿದ್ದಾರೆ. ಮಾಂಟೋರವರ ಕೆಲವು ಕಥೆಗಳನ್ನು ಕನ್ನಡಕ್ಕೆ ಅನುವಾದ. ಮೊದಲನೆಯ ಕಥಾಸಂಕಲನಕ್ಕೆ ಸರ್. ಎಂ ವಿಶ್ವೇಶ್ವರಯ್ಯ ಪ್ರಶಸ್ತಿ ಮತ್ತು ಹುಡುಕಾಟ ಕಥಾಸಂಕಲನಕ್ಕೆ ಸಾವಿತ್ರಮ್ಮ ದತ್ತಿ ಪ್ರಶಸ್ತಿ ದೊರಕಿದೆ. ಸಾಹಿತ್ಯಕ್ಷೇತ್ರವಲ್ಲದೆ ಹವ್ಯಾಸಿ ರಂಗಭೂಮಿಯಲ್ಲೂ ತೊಡಗಿಸಿಕೊಂಡಿರುವ ಇವರು ಸಧ್ಯ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಸದಸ್ಯರಾಗಿದ್ದಾರೆ.

ಕಿರು ಪರಿಚಯ

**ಡಾ. ವಿಜಯಾ ಸುಬ್ಬರಾಜ್**



ವಿದ್ಯಾರ್ಹತೆ: ಬಿಎಸ್ ಸಿ, ಎಂ ಎ,, ಪಿಹೆಚ್ ಡಿ ಎಂ ಎ(ಇಂಗ್ಲೀಷ್), ಎಲ್.ಎಲ್.ಬಿ, ಫ್ರೆಂಚ್ ಭಾಷೆಯಲ್ಲಿ ಡಿಪ್ಲೋಮಾ, ಸಾಹಿತ್ಯ ರತ್ನ(ಹಿಂದಿ)

ವೃತ್ತಿ: ಪ್ರಾಧ್ಯಾಪಕರು(ನಿವೃತ್ತ), ಎಂ. ಇ. ಎಸ್, ಕಾಲೇಜು, ಬೆಂಗಳೂರು

ಪ್ರಕಟಿತ ಕೃತಿಗಳು: 12 ಕವನ ಸಂಕಲನಗಳು, 9 ಕಾದಂಬರಿಗಳು, 7 ಸಣ್ಣಕಥೆಗಳ ಸಂಕಲನಗಳು, 8 ವಿಮರ್ಶಾ ಕೃತಿಗಳು, 11 ಜೀವನ ಚರಿತ್ರೆಗಳು, 14 ನಾಟಕಗಳು, 2 ಮಕ್ಕಳ ಕಾದಂಬರಿಗಳು, 14 ರೇಡಿಯೋ ಲೇಖನಗಳು, ನೂರಾರು ಬಿಡಿ ಲೇಖನಗಳು,

ಪುರಸ್ಕಾರಗಳು: ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಒಳಗೊಂಡಂತೆ 26ಕ್ಕೂ ಹೆಚ್ಚು ಪ್ರಶಸ್ತಿ ಪುರಸ್ಕಾರಗಳು,

ರೂ. ಹತ್ತು ಸಾವಿರ ನಗದು ಹಾಗೂ ಸ್ಮರಣಿಕೆಗಳನ್ನು ಒಳಗೊಂಡಿರುವ ಈ ಪ್ರಶಸ್ತಿಯನ್ನು ಪ್ರತಿಷ್ಠಾನದ ಸಂಯೋಜನಾಧಿಕಾರಿ ಡಾ. ವಿಜಯಾ ಸುಬ್ಬರಾಜ್ ಅವರು 2014 ರಲ್ಲಿ ರೂ. ಎರಡು ಲಕ್ಷಗಳ ದತ್ತಿಯನ್ನು, ಪ್ರತಿ ವರ್ಷ ತಮ್ಮ ಹೆಸರಿನಲ್ಲಿ "ಗಣ್ಯ ಲೇಖಕಿ" ಪುರಸ್ಕಾರವನ್ನು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಗಣನೀಯ ಸೇವೆ ನೀಡಿರುವ ಲೇಖಕಿಗೆ ನೀಡಲು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಸ್ಥಾಪಿಸಿರುತ್ತಾರೆ.

## ಪ್ರೊ.ಎಲ್.ಎಸ್. ಶೇಷಗಿರಿರಾವ್



1925 ನೆಯ ಫೆಬ್ರವರಿ 16ರಂದು ಜನಿಸಿದ ಶ್ರೀ ಎಲ್.ಎಸ್. ಶೇಷಗಿರಿರಾವ್ ಅವರು ಇಂಗ್ಲಿಷ್ ಎಂ.ಎ. ಪದವಿಯನ್ನು ಪಡೆದು ಸರ್ಕಾರಿ ಕಾಲೇಜು ಹಾಗೂ ಬೆಂಗಳೂರು ವಿಶ್ವವಿದ್ಯಾಲಯಗಳಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದಾರೆ. ಕನ್ನಡ ಪುಸ್ತಕ ಪ್ರಾಧಿಕಾರದ ಪ್ರಥಮ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ ಶ್ರೀಯುತರು ಅನೇಕ ಯೋಜನೆಗಳ ಮೂಲಕ ವಿವಿಧ ಕ್ಷೇತ್ರಗಳಲ್ಲಿ ಪ್ರಗತಿಪರ ಕಾರ್ಯಗಳನ್ನು ಮಾಡಿ ಖ್ಯಾತನಾಮರಾಗಿದ್ದಾರೆ. ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳೆರಡಲ್ಲಿ ಕೃತಿರಚನೆ ಮಾಡಿರುವುದು ಶೇಷಗಿರಿರಾವ್ ಅವರ ವೈಶಿಷ್ಟ್ಯವಾಗಿದೆ. ಈವರೆಗೆ ಅವರು ಇಪತ್ತಕ್ಕೂ ಹೆಚ್ಚು ಕೃತಿಗಳನ್ನು ಪ್ರಕಟಿಸಿದ್ದಾರೆ: ಇದು ಜೀವನ, ಜಗದ ಜಾತ್ರೆಯಲ್ಲಿ, ಮುಟ್ಟಿದ ಗುರಿ, ಮುಯ್ಯಿ ಕಥಾಸಂಕಲನಗಳು; ಕಾದಂಬರಿ ಮತ್ತು ಸಾಮಾನ್ಯ ಮನುಷ್ಯ, ಸಾಹಿತ್ಯ ವಿಶ್ಲೇಷಣೆ , ವಿಲಿಯಂ ಷೇಕ್ಸ್ ಪಿಯರ್ , ಇಂಗ್ಲಿಷ್ ಭಾಷೆಯಲ್ಲಿ ಆಧುನಿಕ ಸಾಹಿತ್ಯ ವಿಮರ್ಶೆ, ಇಂಗ್ಲಿಷ್ ಸಾಹಿತ್ಯಚರಿತ್ರೆ, A History of Kannada Literature, T.P . Kailasam, An Introduction to Modern Kannada Literature ಎಂಬಿವೇ ಮುಂತಾದವು ವಿಮರ್ಶಾಕೃತಿಗಳು. ಅವರು 2007ರಲ್ಲಿ ಉಡುಪಿಯಲ್ಲಿ ನಡೆದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದರು. 12–3–1990ರಿಂದ 15–3–1992ರ ವರೆಗೆ ಶ್ರೀಯುತರು ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ. ಶ್ರೀಯುತರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ, ವಿ.ಎಂ.ಇನಾಂದಾರ್ ವಿಮರ್ಶಾ ಪ್ರಶಸ್ತಿ, ವರ್ಧಮಾನ ಪ್ರಶಸ್ತಿ ಮುಂತಾದ ಹಲವಾರು ಪ್ರಶಸ್ತಿಗಳು ಲಭಿಸಿವೆ. ಶ್ರೀಯುತರು 2017ರಲ್ಲಿ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದಲ್ಲಿ **'ಪ್ರೊ. ಎಲ್.ಎಸ್. ಶೇಷಗಿರಿರಾವ್ ವಿಮರ್ಶಕ ಪ್ರಶಸ್ತಿ'** ಯನ್ನು ಸ್ಥಾಪಿಸಿದ್ದಾರೆ.

**HONGANASU KANNADA MONTHLY**
**RNI No. KAR/KAN/2015/64049**
**REGISTERED**
**Post office Registration No.RNP/KA/BGS/2229/2015-2017**
**Office of Posting: Bangalore PSO, Bangalore 560026**
**Price :Annual Subscription Rs. 20/-**
**Date of publishing and Posting : 30-03-2017**

## ೨೦೧೭ ಮಾರ್ಚ್ ತಿಂಗಳಿನಲ್ಲಿ ಹಸ್ತಪ್ರತಿ ವಿಭಾಗದಲ್ಲಿ ಕೈಗೊಂಡ ಕಾರ್ಯಗಳ ವರದಿ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಹಸ್ತಪ್ರತಿ ವಿಭಾಗದಲ್ಲಿ ವಿವಿಧ ಹಂತದ ಸಂರಕ್ಷಣಾ ಕಾರ್ಯವು ನಡೆಯುತ್ತಿದೆ. ೨೦೧೭ರ ಮಾರ್ಚ್ ತಿಂಗಳಿನಲ್ಲಿ ೧೧ ಗ್ರಂಥಗಳ ಶುಷ್ಕ ಶುದ್ಧೀಕರಣ, ೧೧ ಗ್ರಂಥಗಳಿಗೆ ತೈಲ/ಮಸಿ ಲೇಪನ ಕಾರ್ಯ, ೧೩ ಗ್ರಂಥಗಳಲ್ಲಿ ಪತ್ರಗಳ ಮರುಜೋಡಣೆ ಕಾರ್ಯ, ೭ ಗ್ರಂಥಗಳಿಗೆ ಅಟ್ಟೆಕಟ್ಟಿದ ಕಾರ್ಯ, ೭ ಗ್ರಂಥಗಳಿಗೆ ಬಟ್ಟೆ ಕಟ್ಟುವಿಕೆ ಕಾರ್ಯ , ಮತ್ತು ೬ ಗ್ರಂಥಗಳಿಗೆ ಸೂಚಿಯನ್ನು ತಯಾರಿಸಿದೆ.

ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ, ಬೆಂಗಳೂರು, ಇವರು ನಮ್ಮ ಹಸ್ತಪ್ರತಿ ಸಂಗ್ರಹಾಲಯಕ್ಕೆ ಮೂರು ವಾಲ್ಮೀಕಿ ರಾಮಾಯಣದ ಓಲೆಗರಿ ಗ್ರಂಥಗಳನ್ನು ಕೊಡಗೆಯಾಗಿ ನೀಡಿ, ಹಸ್ತಪ್ರತಿಗಳನ್ನು ಸಂರಕ್ಷಿಸಲು ಕಾರಣರಾಗಿದ್ದಾರೆ.

ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಗೆ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನವು ಕೃತಜ್ಞತೆಗಳನ್ನು ಸಲ್ಲಿಸುತ್ತದೆ

## ಅಕ್ಕರ ಗೊಟ್ಟಿ – ಪದ್ಯ

ಕುಮಾರವ್ಯಾಸ ಭಾರತದ ಶಲ್ಯ ಪರ್ವ, 1ನೇ ಸಂಧಿ, 25ನೇ ಪದ್ಯ.

ಅದುದುತ್ಸವ ಕರ್ಣಮರಣದ
ಖೇದವಕ್ಕಿತು ಹಗೆಗೆ ಕಾಲ್ವೊಳೆ
ಯಾದ ವೀರರಸಾಬ್ಧಿ ನೆಲೆದಪ್ಪಿತ್ತು ನಿಮಿಷದಲಿ
ಬೀದಿವರಿದುದು ಬಿಂಕ ನನೆಕೊನೆ
ವೋದುದಾಶಾಬೀಜ ಲಜ್ಜೆಯ
ಹೋದ ಮೂಗಿಗೆ ಕದಪ ಹೊಯ್ದನು ನಿನ್ನ ಮಗನೆಂದ ॥25॥

**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath

**ಅಚ್ಚಾದ ಪುಸ್ತಕ** ತೆರೆದ–ಅಂಚೆ

ಶ್ರೀಮತಿ/ಶ್ರೀ.................................................................................

.................................................................................

.................................................................................

ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭